ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೫
Vol. 02 Issue 05

ಆಗಸ್ಟ್ ೨೦೧೫
August 2015

ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್
Editor : Sri. B.R. Ravindranath



**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**

**ಐದು ವರ್ಷಗಳ ಚಂದಾ**
**ರೂ. ೧೦೦/–**

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com



ಸ್ವತಂತ್ರ ಭಾರತದಲ್ಲಿ ಜನಿಸಿ ನಮ್ಮ ದೇಶದ ಜನರ ಮೇಲೆ ಅತ್ಯಂತ
ಹೆಚ್ಚು ಪ್ರಭಾವ ಬೀರಿ ಎಲ್ಲರ ಕಣ್ಮಣಿಯಾಗಿದ್ದ ಮಹಾನ್ ವ್ಯಕ್ತಿ
ಡಾ.ಅಬ್ದುಲ್ ಕಲಾಂ ಅವರು ನಮ್ಮನ್ನು ಅಗಲಿದ್ದಾರೆ.

ಅವರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು
ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಕೋರುತ್ತದೆ.

# ಸಂಪಾದಕೀಯ

ನಮ್ಮ ದೇಶ ಸ್ವಾತಂತ್ರ್ಯ ಪಡೆದ ನಂತರ ಹಲವಾರು ಪ್ರಭಾವಿ ನಾಯಕರು ಹಲವಾರು ಕ್ಷೇತ್ರಗಳಲ್ಲಿ ಸಾಧನೆಗಳನ್ನು ಮಾಡಿ ಹೆಸರುವಾಸಿಯಾಗಿರುತ್ತಾರೆ.ಅವರುಗಳ ಸಾಲಿನಲ್ಲಿ ನಮ್ಮನ್ನು ಈಗ ತಾನೆ ಅಗಲಿದ ಡಾ.ಅಬ್ದುಲ್ ಕಲಾಂ ಅಗ್ರ ಸ್ಥಾನ ಪಡೆದಿರುತ್ತಾರೆ. ವಿಜ್ಞಾನಿಯಾಗಿ ಭಾರತಕ್ಕೆ ಸಲ್ಲಿಸಿದ ಅಪಾರ ಸೇವೆಯ ಜೊತೆಗೆ ನಮ್ಮ ದೇಶದ ರಾಷ್ಟ್ರಪತಿಯಾಗಿ ಎಲ್ಲರ ಕಣ್ಮಣಿಯಾಗಿದ್ದರು. ಅವರಲ್ಲಿದ್ದ ಹಲವಾರು ಕೊಂಡಾಡಬಹುದಾದ ಗುಣಗಳಲ್ಲಿ ಒಂದು ಉತ್ತಮ ಗುಣವೆಂದರೆ ಅವರ ಸರಳತೆ.ಬಹುತೇಕವಾಗಿ ಪ್ರಾಮಾಣಿಕ ಹಾಗೂ ದಕ್ಷ ವ್ಯಕ್ತಿಗಳಲ್ಲಿ ವಿಲಕ್ಷಣ ವ್ಯಕ್ತಿತ್ವದ ಲಕ್ಷಣಗಳು ಕಂಡುಬರುವುದು ವಾಡಿಕೆ.ಡಾ. ಅಬ್ದುಲ್ ಕಲಾಂ ಅವರು ಅತ್ಯಂತ ಪ್ರಾಮಾಣಿಕ ಹಾಗೂ ದಕ್ಷರಾಗಿದ್ದರೂ ಯಾವುದೇ ವಿಲಕ್ಷಣವಿಲ್ಲದೇ ತಮ್ಮ ಜೀವನದುದ್ದಕ್ಕೂ ಸರಳವಾಗಿ ಜೀವನ ನಡೆಸಿ ಒಂದು ಮಾದರಿ ವ್ಯಕ್ತಿಯಾಗಿರುತ್ತಾರೆ.ಅವರು ನಮ್ಮ ಭಾರತದಲ್ಲಿಯೇ ಮತ್ತೊಮ್ಮೆ ಹುಟ್ಟಿ ದೇಶದ ಪ್ರಗತಿಗೆ ಮತ್ತಷ್ಟು ಸೇವೆ ಸಲ್ಲಿಸಲಿ ಎಂಬುದು ನಮ್ಮ ಆಸೆ.

ವಿಶ್ವದ ಭಾಷೆಗಳ ಬಗ್ಗೆಯ ಅಂಕಿ ಅಂಶಗಳ ಅಧ್ಯಯನ ಮಾಡಿದಾಗ ಹಲವಾರು ಕುತೂಹಲಕಾರಿ ಅಂಶಗಳು ಕಂಡುಬರುತ್ತವೆ. ಪ್ರಪಂಚದಲ್ಲಿ ಸುಮಾರು 7106 ಭಾಷೆಗಳಿದ್ದು ಶೇ 95 ರಷ್ಟು ಜನ ಕೇವಲ ಶೇ5 ರಷ್ಟು ಭಾಷೆಗಳನ್ನು ಮಾತ್ರ ಬಳಸುತ್ತಿದ್ದಾರೆ. ಸುಮಾರು 915 ಭಾಷೆಗಳು ಅಳಿದುಹೋಗುವ ಅಂಚಿನಲ್ಲಿವೆ. 20ನೇ ಶತಮಾನದಲ್ಲಿ 110 ಭಾಷೆಗಳು ಅಳಿದುಹೋಗಿದ್ದರೆ 21ನೇ ಶತಮಾನದಲ್ಲಿ ಈಗಾಗಲೇ 12 ಭಾಷೆಗಳು ಅವನತಿಗೊಂಡಿವೆ. ಏಷ್ಯಾ ಖಾಂಡದಲ್ಲಿ 2303 ಭಾಷೆಗಳು ಬಳಕೆಯಲ್ಲಿದ್ದರೆ ಯೂರೋಪ್ ಖಂಡದಲ್ಲಿ ಕೇವಲ 285 ಭಾಷೆಗಳಿರುತ್ತವೆ. ಕನ್ನಡದ ವಿಷಯಕ್ಕೆ ಬಂದಾಗ ಬಹು ದೊಡ್ಡ ಹುದ್ದೆಗಳಲ್ಲಿರುವವರು, ಬಹು ದೊಡ್ಡ ವಿದ್ವಾಂಸರುಗಳು ಹಾಗೂ ಹಲವಾರು ಜನಪ್ರಿಯ ನಾಯಕರು ಕನ್ನಡದ ಬಗ್ಗೆಯ ತಮ್ಮ ಕಳಕಳಿಯನ್ನು ವ್ಯಕ್ತಪಡಿಸುವ ಉತ್ಸಾಹದಲ್ಲಿ ಕನ್ನಡ ಭಾಷೆಯು ಅಳಿವಿನ ಅಂಚಿನಲ್ಲಿದೆ ಎಂಬುವ ಭಾವನೆಗಳನ್ನು ತೋರುವ ಹೇಳಿಕೆಗಳನ್ನು ನೀಡುವುದನ್ನು ನಾವೆಲ್ಲರೂ ಕಂಡಿದ್ದೇವೆ. ರೂ. 2.72 ಲಕ್ಷಕೋಟಿ ಜಿಡಿಪಿ ಇರುವ ತಲಾ ರೂ.90 ಸಾವಿರ ವಾರ್ಷಿಕ ವರಮಾನ ಇರುವ ಕರ್ನಾಟಕ ರಾಜ್ಯದ 6.11 ಕೋಟಿ ಜನತೆ ಬಳಸುವ ಭಾಷೆ ಒಂದು ಸದೃಢ ಭಾಷೆಯಾಗಿರುತ್ತದೆ.ಜೊತೆಗೆ ಕನ್ನಡ ಭಾಷೆಯ ಏಳಿಗೆಗಾಗಿ ವಿಶ್ವದಾದ್ಯಂತ ಹತ್ತಾರು ಸಾವಿರ ವಿದ್ವಾಂಸರು, ತಂತ್ರಜ್ಞಾನಗಳು, ಆಸಕ್ತರು ನಿರಂತರವಾಗಿ ಶ್ರಮಿಸುತ್ತಿರುವಾಗ ಕನ್ನಡ ಭಾಷೆ ಅಳಿಯುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಕನ್ನಡ ಭಾಷೆಯ ಭವಿಷ್ಯದ ಬಗ್ಗೆ ಆತಂಕ ಬಿಟ್ಟು ಉತ್ಸಾಹವಾಗಿ ಕನ್ನಡದ ಏಳಿಗೆಗಾಗಿ ನಾವೆಲ್ಲರೂ ಶ್ರಮಿಸೋಣ.

ಕನ್ನಡದ ಏಳಿಗೆಗಾಗಿ ತಮ್ಮ ಜೀವನವನ್ನೇ ಮುಡುಪಿಟ್ಟ ಬಿಎಂಶ್ರೀ ಅವರ ಹೆಸರಿನಲ್ಲಿ ಕನ್ನಡಕ್ಕಾಗಿ ಜೀವನ ಪರ್ಯಂತ ಶ್ರಮಿಸಿದ ಎಂವಿಸಿ ಅವರು ಕಟ್ಟಿದ ನಮ್ಮ ಪ್ರತಿಷ್ಠಾನವು ಕನ್ನಡ ಭಾಷೆಯ ಸರ್ವೋತೋಮುಖ ಬೆಳವಣಿಗೆಗಾಗಿ ಬದ್ಧವಾಗಿದೆ.ಕನ್ನಡದ ವೈಶಿಷ್ಟ್ಯತೆಗಳನ್ನು ಪ್ರಚುರ ಪಡಿಸುವುದು ನಮ್ಮ ಚಟುವಟಿಕೆಗಳಲ್ಲಿ ಒಂದು.ಈ ನಿಟ್ಟಿನಲ್ಲಿ ಕನ್ನಡ ಭಾಷೆಯನ್ನು ಆಳವಾಗಿ ಅಧ್ಯಯನ ಮಾಡಿರುವ ಕನ್ನಡ ಪರ ಹೋರಾಟಗಾರ ಹಾಗೂ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ.ವಿ.ನಾರಾಯಣ ಅವರು ರಚಿಸಿರುವ **ಪದಚರಿತೆ – ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ ಶಬ್ದಕೋಶವನ್ನು** ಈ ತಿಂಗಳಿನಿಂದ ನಾವು ಹೊಸ ಅಂಕಣದ ರೂಪದಲ್ಲಿ ಪ್ರಾರಂಭಿಸುತ್ತಿದ್ದೇವೆ. ಕನ್ನಡದ ಸಂಪದ್ಭರಿತ ಪದಗಳ ಭಂಡಾರದಿಂದ ಕೆಲವು ಪದಗಳ ಬಳಕೆ ಹಾಗೂ ಅವುಗಳ ವಿವರಗಳನ್ನು ಈ ಅಂಕಣದಲ್ಲಿ ನೀಡಲಾಗುತ್ತದೆ.ಇದು ಹೊಂಗನಸು ಪತ್ರಿಕೆಯ ಎಲ್ಲಾ ಓದುಗರಿಗೂ ಉಪಯುಕ್ತವಾಗುತ್ತದೆ ಎಂದು ನಾವು ನಂಬಿದ್ದೇವೆ. ನಮ್ಮ ಪ್ರತಿಕ್ರಿಯೆಗಳಿಗೆ ಸ್ವಾಗತ.

**ಬಿ. ಆರ್. ರವೀಂದ್ರನಾಥ್**
ಸಂಪಾದಕರು

**ಆಗಸ್ಟ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು**

**ಶನವಾರ 08ನೇ ಆಗಸ್ಟ್ 2015**
ಅಕ್ಕರಗೊಟ್ಟಿ ಕಾರ್ಯಕ್ರಮ
ವಿಷಯ :ಹರಿಶ್ಚಂದ್ರ ಕಾವ್ಯದ ಪದ್ಯಗಳ ಆಶಯ
ಚಾಲನೆ ನೀಡುವವರು: ಡಾ. ವಿಜಯಾ ಸುಬ್ಬರಾಜ್
ಸ್ಥಳ : ಪ್ರೊ. ಶಾ. ಬಾಲೂರಾವ್ ಮಾತಿನ ಮನೆ,

ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯ ಚಿತ್ರ ಪ್ರದರ್ಶನ
**ಗುರುವಾರ 13ನೇ ಆಗಸ್ಟ್2015 ಸಂಜೆ ಆರು ಗಂಟೆಗೆ**
ಪೊನ್ನ ಹಾಗೂ ರನ್ನ

ಸೋಮವಾರ 24ನೇ ಆಗಸ್ಟ್ 2015 ಸಂಜೆ ಆರು ಗಂಟೆ
**ತೀನಂಶ್ರೀ, ಕವೆಂ ರಾಘವಾಚಾರ್, ರಾಸ ಸಾಹಿತ್ಯ ದತ್ತಿ ಕಾರ್ಯಕ್ರಮ**
ಉಪನ್ಯಾಸ: ಡಾ. ಸುಬ್ರಮಣ್ಯಸ್ವಾಮಿ
ವಿಷಯ: ವ್ಯಾಸರಾಯ ಬಲ್ಲಾಳರ ಕಾದಂಬರಿಗಳು

**ವಚನ ವಿಹಾರ**
ಸಂಗೀತಾತ್ಮಕ ಸಾಕ್ಷ್ಯ ಚಿತ್ರ ಪ್ರದರ್ಶನ
ಗುರುವಾರ 27ನೇ ಆಗಸ್ಟ್ 2015 ಸಂಜೆ ಆರು ಗಂಟೆಗೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜೂನ್2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

# 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

ಅಕ್ಕರಗೊಟ್ಟಿ ಕಾರ್ಯಕ್ರಮ–3
(11 ಜುಲೈ 2015 ಶನಿವಾರ)
ಸಂಜೆ 5:30 ರಿಂದ 7:30 ಶಾ. ಬಾಲೂರಾವ್ ಮಾತಿನ ಮಂಟಪ
ವಿಷಯ: ಕನ್ನಡ ಕಲಿಕೆ.
ಮಂಡನೆ: ಪ್ರೊ, ಜಿ. ಅಶ್ವತ್ಥನಾರಾಯಣ (ಹಿರಿಯ ಸಾಹಿತಿಗಳು)

11–07–2015ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಕ್ಕರ ಗೊಟ್ಟಿ ಕಾರ್ಯಕ್ರಮು–3 ರಲ್ಲಿ ಕನ್ನಡ ಕಲಿಕೆ ಬಗ್ಗೆ ಪ್ರೊ.ಜಿ.ಅಶ್ವತ್ಥನಾರಾಯಣ ಅವರು ಅನುಭವ ಪೂರ್ಣವಾಗಿ ಹತ್ತಾರು ವಿಷಯಗಳನ್ನು ಮಂಡಿಸಿದರು.ಕನ್ನಡ ಕಲಿಕೆಗೆ ಹಲವಾರು ವಿಧಾನಗಳಿವೆ. ಈ ಪದ್ಧತಿ ದೇವುಡು ಅವರ ಎ ಒ ದ ರ ಲ ಅಕ್ಷರ ಕಲಿಕಾ ವಿಧನ ಮೈಸೂರು ಅಕ್ಷರ ಪ್ರಚಾರ ಪದ್ಧತಿ.ಇದೇ ವ ಂ ರ ು ಸ್ಕ ರ ಶಿ ಕ್ಷ ಣ ಪ ದ್ಧ ತಿ ಜಾ ರಿ ಗೆ ಬ ರ ಲು ಕಾರಣವಾಯಿತು.ಚ.ವಾಸುದೇವಯ್ಯ, ಎಂ.ಆರ್.ಶ್ರೀ ಮೊದಲಾದವರು ಬಳಕೆಗೆ ತಂದ ಪದ್ಧತಿ ಸಾರ್ವತ್ರಿಕವಾದುದು, ಸರ್ವೊಪಯುಕ್ತವಾದುದು.ಸ್ವರ ಮತ್ತು ವ್ಯಂಜನ ಸೇರಿಸಿ ಪದಗಳ ಮೂಲಕ ಅಕ್ಷರ ಪರಿಚಯ, ಆಮೇಲೆ ಕಾಗುಣಿತಾಕ್ಷರಗಳ ಪರಿಚಯ, ಆನಂತರ ಒತ್ತಾಕ್ಷರಗಳ ಪರಿಚಯ, ಅಂಕಿಗಳ ಪರಿಚಯ, ಕೋಷ್ಟಕಗಳು, ಅಕ್ಷರಗಳ ಅಭ್ಯಾಸಕ್ಕೆ ಕಾಪಿ ಬರೆಯುವುದು ಈ ಪರಂಪರೆಯ ಪದ್ಧತಿಯೇ ಕನ್ನಡಕ್ಕೆ ಸೂಕ್ತವಾದುದು. ಕಲಿಯಲು ಸುಲಭವಾದದ್ದು ಈ ಪದ್ಧತಿಯಲ್ಲಿ ಕಲಿತವರು ಉಚ್ಚಾರದೋಷ, ಬರಹದಲ್ಲಿ ಕಾಗುಣಿತ–ಒತ್ತಾಕ್ಷರ ತಪ್ಪಿ ಬರೆಯುವುದು ಮಾಡುವುದಿಲ್ಲ. ಕನ್ನಡ ಕಲಿಸುವಾಗ ಮೊದಲು ಮಾತು ಆಮೇಲೆ ಓದು ನಂತರ ಬರಹ ಕಲಿಸಬೇಕು.ಕನ್ನಡಿಗರಿಗೆ ಕನ್ನಡೇತರಿಗೆ ಪ್ರತ್ಯೇಕ ವಿಧಾನಗಳಲ್ಲಿ ಕಲಿಸಬೇಕು ಎಲ್ಲರಿಗೂ ಒಂದೇ ರೀತಿ ಕಲಿಸಲಾಗದು.ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಹಂತಗಳಲ್ಲಿ ಕ್ರಮಬದ್ಧವಾಗಿ ಕಲಿಸಬೇಕು.ಕನಿಷ್ಠ 1ತಿಂಗಳಿಂದ 3ತಿಂಗಳು ಕಲಿಯ ಬೇಕು.ಚಿಕ್ಕ ಮಕ್ಕಳಿಗೆ ಕಲಿಸಲು ದೊಡ್ಡವರಿಗೆ ಕಲಿಸಲು ಬಳಸುವ ಭಾಷಾ ಸಾಧನಗಳು ಬೇರೆ ಬೇರೆ ಇದೆ. ಕನ್ನಡೇತರರಿಗೆ, ಭಾರತೀಯರಿಗೆ, ವಿದೇಶಿಯರಿಗೆ ಕಲಿಸಲು ತಕ್ಕ ಪುಸ್ತಕಗಳು ಕನ್ನಡದಲ್ಲಿರುವುದಿಲ್ಲ. ಈಗ ಬಂದಿರುವುದು ಅಸಮರ್ಪಕವಾಗಿದೆ. ಅಂದವಾದ ತಪ್ಪಿಲ್ಲದ ಮತ್ತು ಉಚ್ಚಾರ ಶುದ್ಧಿ ಇರುವ ರೀತಿ ಕಲಿಸುವುದು ಹೇಗೆ ಎಂಬದನ್ನು ಸೋದಾಹರಣವಾಗಿ ವಿವರಿಸಿದರು.

ಆನಂತರ ನಳಿನಿ, ಗಣೇಶ್, ಸಂಧ್ಯಾ ಮೊದಲಾದವರು ಚರ್ಚೆಯಲ್ಲಿ ಭಾಗವಹಿಸಿದರು. ಆಡುಭಾಷೆಯನ್ನು ಬರಹದಲ್ಲಿ ಬಳಸಬೇಕಾದ ಅಗತ್ಯವಿಲ್ಲ ಶಿಷ್ಟ ಭಾಷೆ ಬಳಸುವುದೇ ಸೂಕ್ತ ಎಂದರು ನಳಿನಿ ಅವರು. ಆಡು ಮಾತಿನ ರೀತಿ ಬರಹ ಬರೆಯುವುದು ಮುಖ್ಯ ಎಂದರು ಪಿ.ವಿ.ನಾರಾಯಣ ಅವರು.ಕನ್ನಡ ಕಲಿಸಲು ನೇರವಾಗಿ ಕಲಿಸಲು ಸಾಕಷ್ಟು ಉಪಾಧ್ಯಾಯರು ಇಲ್ಲದಿರುವುದು, ಏಕೋಪಾಧ್ಯಾಯ ಶಾಲೆ, ತರಗತಿಯಲ್ಲಿ ವಿದ್ಯಾರ್ಥಿ ಸಂಖ್ಯೆ ಬಾಹುಳ್ಯ ಮೊದಲಾದ ಕಾರ್ಯಕ್ರಮಗಳಿಂದ ನೇರವಾಗಿ ಮಕ್ಕಳಿಗೆ ಕಲಿಸದೆ ಇರುವುದರಿಂದ ಭಾಷಾ ದೋಷಗಳಾಗಿ ಓದುವುದನ್ನು ಕಲಿತು ಮಕ್ಕಳು ಬರೆಯುವುದನ್ನೇ ಕಲಿಯುತ್ತಿಲ್ಲ ಎಂದು ಆರ್.ಗಣೇಶ್ ಅವರು ಹೇಳಿದರು.ಅಮೆರಿಕೆಯಲ್ಲಿ ಶಾಲಾ ಶಿಕ್ಷಣ ಅತ್ಯುತ್ತಮ ರೀತಿಯಲ್ಲಿದೆ ಒಂದು ತರಗತಿಗೆ 10–15ರ ಮೇಲೆ ವಿದ್ಯಾರ್ಥಿಗಳಿರುವುದಿಲ್ಲ. ಶಾಲೆ ಎಲ್ಲ ರೀತಿಯಲ್ಲಿ ಸುಸಜ್ಜಿತವಾಗಿರುತ್ತದೆ ಎಂದು ವಿಷಯ ಮಂಡಿಸಿದರು.ಇತರರು ಹಲವಾರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.ಒಟ್ಟಿನಲ್ಲಿ ತುಂಬಾ ಉಪಯುಕ್ತವಾದ ಸಕಾಲಿಕ ಚರ್ಚೆಯ ಗೋಷ್ಠಿ ಆಯಿತು.

ಹೀಗಾಗಿ ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಡಾ. ನಳಿನ ವೆಂಕಟೇಶ್, ಡಾ.ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

('ಅಕ್ಕರ ಗೊಟ್ಟಿ'ಯ ಆಗಸ್ಟ್ ತಿಂಗಳ ಕಾರ್ಯಕ್ರಮ 08–08–2015 ರಂದು ಸಂಜೆ 6–00 ಗಂಟೆಗೆ 'ಶಾ, ಬಾಲೂರಾವ್ ಮಾತಿನ ಮನೆ'ಯಲ್ಲಿ)

## ಕಾರ್ಯಕಾರಿ ಸಮಿತಿ ಸಭೆ

ದಿನಾಂಕ 27ನೇ ಜುಲೈ 2015ರಂದು ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಈ ಸಭೆಯಲ್ಲಿ ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನದ ಉಪನಯಮಗಳಿಗೆ ಕೆಲವು ತಿದ್ದುಪಡಿಗಳನ್ನು ಮಾಡುವ ಬಗ್ಗೆ ಚರ್ಚೆಗಳನ್ನು ನಡೆಸಿ ತಿದ್ದುಪಡಿಗಳಿಗೆ ಅನುಮೋದನೆ ಪಡೆಯಲು ವಿಶೇಷ ಸರ್ವ ಸದಸ್ಯರ ಸಭೆಯನ್ನು ಭಾನುವಾರ 4ನೇ ಅಕ್ಟೋಬರ್ 2015ರಂದು ಬೆಳಿಗ್ಗೆ 10.30ಗೆ ಕರೆಯಬೇಕೆಂಬನಿರ್ಧಾರವನ್ನು ಕೈಗೊಳ್ಳಲಾಯಿತು. ಹಾಗೆಯೇ ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನದ ಸಿಬ್ಬಂದಿ ವರ್ಗದವರಿಗೆ ವಿಮೆ ಸೌಲಭ್ಯ ಇತ್ಯಾದಿ ವಿಷಯಗಳ ಬಗ್ಗೆ ಚರ್ಚೆಗಳನ್ನು ನಡೆಸಿ ಅನುಮೋದಿಸಲಾಯಿತು.

# ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹೊಸ ಕಾರ್ಯಕ್ರಮವಾದ ಈ ಕಾರ್ಯಕ್ರಮದಲ್ಲಿ ಎರಡನೇ ಕಾರ್ಯಕ್ರಮವನ್ನು 18ನೇ ಜೂನ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ಅಳವಡಿಸಲಾಗಿರುವ ನೂತನ ಪ್ರೊಜೆಕ್ಟರ್ ಮೂಲಕ **"ಮಹಾಕವಿ ಪಂಪ"**ಭಾಗ 1 ಮತ್ತು ಭಾಗ 2ವಿಡಿಯೋ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಬಹು ಜನರಿಗೆ ಅಪರಿಚಿತವಾದ ಹಲವಾರು ಆಸಕ್ತಿದಾಯಕ ವಿಷಯಗಳನ್ನು ಒಳಗೊಂಡ ಈ ಸಾಕ್ಷ್ಯಚಿತ್ರವು, ಬಹು ಸಂಖ್ಯೆಯಲ್ಲಿ ಬಂದಿದ್ದ ಸಭಿಕರನ್ನು ಕನ್ನಡ ಭಾಷೆಯ ಇತಿಹಾಸದ ಬಗ್ಗೆ ಹಾಗೂ ಕನ್ನಡ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿರುವ ಪಂಪ ಹಾಗೂ ಆತನ ಕೃತಿಗಳ ಬಗ್ಗೆ ತಿಳುವಳಿಕೆ ನೀಡಿತು.

## ವಚನ ವಿಹಾರ – ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

27ನೇ ಜುಲೈ 2015ರಂದು ವಚನ ವಿಹಾರ – ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು.ಸುಮಾರು ಒಂದು ಗಂಟೆಯ ಈ ಸಂಗೀತ ಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಬಸವಣ್ಣ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಖೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

# ಕಾರ್ನಾಡ್ ನಾಟಕಗಳು

ದಿನಾಂಕ. 23–07–2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವತಿಯಿಂದ ಆಯೋಜಿಸಿದ ಶ್ರೀ ಸಿ.ಕೆ ನಾಗರಾಜರಾವ್, ಪ್ರೊ ಕೊರಟಿ ಶ್ರೀನಿವಾಸರಾವ್ ಮತ್ತು ಪ್ರೊ.ಡಿ.ಲಿಂಗಯ್ಯ ದತ್ತಿ ಕಾರ್‍ಯಕ್ರಮದಲ್ಲಿ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ತರಾದ ಡಾ.ಬಿ.ಎ. ಅನ್ನದಾನೇಶ್‌ವರು ಡಾ.ಗಿರೀಶ್ ಕಾರ್ನಾಡರ ಸಮಗ್ರ ನಾಟಕಗಳ ಕುರಿತು ಉಪನ್ಯಾಸ ನೀಡಿದರು.

ಗಿರೀಶ್ ಕಾರ್ನಾಡರ ಸುಮಾರು 14 ನಾಟಕಗಳು ಚರಿತ್ರೆ ಪುರಾಣ.ಇತಿಹಾಸ ಜಾನಪದ ಮೂಲಗಳಿಂದ ವಸ್ತುವನ್ನು ಆಯ್ಕೆ ಮಾಡಿ ಅವುಗಳಿಗೆ ಸಮಕಾಲೀನತೆಯನ್ನು ಕಲ್ಪಿಸಿ ಆಧುನಿಕ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಬೆಸೆದು ಅಭಿವ್ಯಕ್ತಿಸುತ್ತಾರೆ. ಪ್ರತಿ ನಾಟಕಗಳು ಕೂಡಾ ಒಂದಲ್ಲಾ ಒಂದು 'ಆಧುನಿಕ ಸಮಸ್ಯೆ'ಗಳನ್ನು ಒಳಗೊಂಡಿರುತ್ತವೆ. ಮನುಷ್ಯನ ಅಪೂರ್ಣತೆಯನ್ನು ಕುರಿತು ಅವರ ಹಯವದನ, ನಾಗಮಂಡಲ ಮುಂತಾದ ನಾಟಕಗಳನ್ನು ಗಮನ ಸೆಳೆದರೆ ಖಿಠಿಟುಣ ಕಜಢಿಂಟಚಿಟುಣಾಥಿ ಕುರಿತು ತಲೆದಂಡ ತುಘಲಕ್ ಮತ್ತಿತರ ನಾಟಕಗಳು ಚರ್ಚಿಸುತ್ತವೆ. ಹೇಗೆ ಕಾರ್ನಾಡರ ನಾಟಕಗಳ ಪಕ್ಷಿನೋಟದ ಮೂಲಕ ಆಧುನಿಕ ಆಯಾಮಗಳನ್ನು ಕಟ್ಟಿಕೊಟ್ಟಿದ್ದಾರೆ.

# ಪತ್ರಿಕಾ ಪ್ರಕಟಣೆ

**ಶಾ. ಬಾಲೂರಾವ್‌ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ **ರೂಪಾಯಿ ಇಪ್ಪತ್ತೈದು ಸಾವಿರಗಳ ನಗದು ಹಾಗೂ ಸ್ಮರಣಿಕೆಯನ್ನು** ಒಳಗೊಂಡಿರುವ ಶಾ. ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ 2014ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷ್ ಗೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಅನುವಾದಕರು ಪ್ರಕಟಗೊಂಡ ಕೃತಿಯ ಒಂದು ಪ್ರತಿಯನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ), 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019 ದೂರವಾಣಿ ಸಂಖ್ಯೆ : 08026615877 ಇವರಿಗೆ ಕಳುಹಿಸಬಹುದು. **ಕೊನೆಯ ದಿನಾಂಕ : 15ನೇ ಆಗಸ್ಟ್ 2015**

## ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ನೂತನ ಪ್ರೊಜೆಕ್ಟರ್ ನ್ನು ಅಳವಡಿಸಿದ್ದು, ಇನ್ನು ಮುಂದೆ ಪ್ರತಿ ತಿಂಗಳೂ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗ್ಗೆ ಕರ್ನಾಟಕ ವಾರ್ತಾ ಇಲಾಖೆ ಹಾಗೂ ಇತರ ಸಂಸ್ಥೆಗಳು ನಿರ್ಮಾಣ ಮಾಡಿರುವ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶನ ಮಾಡಲಾಗುವುದು. ಸಾಹಿತ್ಯಾಸಕ್ತರು ಈ ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳಲ್ಲಿ ಉಪಸ್ಥಿತರಿರಬೇಕೆಂದು ಕೋರುತ್ತೇವೆ.



# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ.ಪಿ.ವಿ, ನಾರಾಯಣ

ಭಾಷೆ ಎಂಬುದು ಒಂದು ವಿಸ್ಮಯ, ನಾಗರಿಕ ಮಾನವನ ಮಹಾ ಅನ್ವೇಷಣೆ.ಜಗತ್ತಿನಲ್ಲಿ ಸಾವಿರಾರು ಭಾಷೆಗಳಿವೆಯಂತೆ. ಅವುಗಳಲ್ಲಿ ಕನ್ನಡದ್ದು ವಿಶಿಷ್ಟ ಸ್ಥಾನ. ಕನಷ್ಠ ಎರಡು ಸಾವಿರದ ಮುನ್ನೂರು ವರ್ಷಗಳಿಂದ ಜನಭಾಷೆಯಾಗಿದ್ದು ಇಂದಿಗೂ ಜೀವಂತವಾಗಿರುವ ನುಡಿ ಇದು.ಇಂಥ ಅನನ್ಯತೆ ಇರುವುದು ಪ್ರಪಂಚದ ನಾಲ್ಕೈದು ಭಾಷೆಗಳಿಗೆ ಮಾತ್ರ. ಅಸಂಖ್ಯಾತ ಜನ ಕನ್ನಡವನ್ನು ಬಳಸುತ್ತ ಬಳಸುತ್ತ ಆ ನುಡಿಯಲ್ಲಿನ ಶಬ್ದಗಳಿಗೂ ಅವುಗಳ ಆಳದ ಅರ್ಥಗಳಿಗೂ ಅನನ್ಯ ಸಂಬಂಧ ಉಂಟಾಗಿದೆ. ಮಾತಿಗೂ ಅರ್ಥಕ್ಕೂ ಇರುವ ನಂಟನ್ನು ಕಾಳಿದಾಸ ಶಿವಪಾರ್ವತಿಯರಿಗೆ ಹೋಲಿಸಿದ್ದಾನೆ. ಆದರೆ ಶಬ್ದ–ಅರ್ಥಗಳಲ್ಲಿ ಮೂಲಭೂತವಾದ ನಂಟೇನೂ ಇಲ್ಲ, ರೂಢಿಯಿಂದ ಬಂದದ್ದು.ಅಷ್ಟೆ.

"ಪದನರಿದು ನುಡಿಯಲುಂ ನುಡಿದುದಂ ಅರಿದು ಆರಯಲುಂ ಆರ್ಪರ್ ಆ ನಾಡವರ್ಗಳ್" ಎಂದು ಕನ್ನಡದ ಅತ್ಯಂತ ಪ್ರಾಚೀನ ಉಪಲಬ್ಧ ಕೃತಿ 'ಕವಿರಾಜಮಾರ್ಗ' ಹೇಳುತ್ತದೆ.ಭಾಷೆಯ ಹದವನ್ನು ತಿಳಿದು ಮಾತನಾಡುವುದನ್ನೂ, ಇತರರು ಹೇಳಿದ್ದನ್ನು ಸರಿಯಾಗಿ ಅರ್ಥಮಾಡಿಕೊಂಡು ಯೋಚಿಸುವುದನ್ನೂ ಕನ್ನಡಿಗರು ಬಲ್ಲರು ಎಂಬುದು ಈ ಮಾತಿನ ಅರ್ಥ.ಇದು ಅವರಿಗೆ ಸಹಜವೆಂಬಂತೆ ಅದು ವರ್ಣಿಸುತ್ತದೆ.ಆದರೆ ಇದು ಅಭಿಮಾನದ ಮಾತು.ಮಾತು ಮತ್ತು ಅರ್ಥ – ಇವೆರಡರ ಸಂಬಂಧವನ್ನು ಅರಿತಾಗ ಮಾತ್ರ ಮಾತಿನ 'ಹದ' ಉಂಟಾಗುತ್ತದೆ.ಮಾತಿನ ಹೊರಮೈ, ಅದರಲ್ಲಿ ಅರ್ಥ ಬಂದು ಸೇರುವ ಬಗೆ – ಇವುಗಳ ಮರ್ಮ ತಿಳಿದರೆ ಭಾಷೆಯ ಬಗೆಗಿನ ಹಿಡಿತ ಕೈಗೂಡೀತು. ಇದು ಸಾಧ್ಯವಾಗುವುದು ಅಭ್ಯಾಸದಿಂದ, ಎರಡೂ ರೀತಿಯಲ್ಲಿ: ಓದುವುದರಿಂದ ಹಾಗೂ ಬಳಸುವುದರಿಂದ. ಈ ಎರಡು ಸಾವಿರದ ಮುನ್ನೂರು ವರ್ಷಗಳಲ್ಲಿ ಅಸಂಖ್ಯಾತ ಕನ್ನಡಿಗರ ಬಳಕೆ ಎಂಬ ಪಾತ್ರದಲ್ಲಿ ಕನ್ನಡ ಶಬ್ದವಾಹಿನಯು ನರಂತರವಾಗಿ ಹರಿದು ಬಂದಿದೆ; ಆ ಹರಿವಿನಲ್ಲಿ ಕೆಲವು ಶಬ್ದಗಳು ಹಿಂದಿನಂತೆಯೇ ಉಳಿದು ಬಂದಿವೆ, ಕೆಲವು ಮಾರ್ಪಾಟು ಹೊಂದಿವೆ, ಮತ್ತೆ ಕೆಲವು ಮರಳಲ್ಲಿ ಇಂಗಿಹೋಗಿವೆ, ಎಷ್ಟೋ ಪದಗಳು ಹೊಸತಾಗಿ ಬಂದು ಸೇರಿಕೊಂಡಿವೆ – ಹೀಗೇ ಈ ನದಿ ಹರಿಯುತ್ತಿದೆ. "ಶಬ್ದಪಾರಂ ಆರ್ಗಂ ಅಶಕ್ಯಂ" ಎಂಬ ಮಾತಿದ್ದರೂ, ನಾವು ಬಳಸುವ ಶಬ್ದಗಳ ಸ್ವರೂಪ – ಅಂದರೆ ಅವುಗಳ ಹುಟ್ಟು, ಬೆಳವಣಿಗೆಗಳನ್ನು ಕೆದಕುವ ಹಾಗೂ ಶಬ್ದ–ಅರ್ಥಗಳ ದಾಂಪತ್ಯದ ಮರ್ಮವನ್ನು ಬೆದಕುವ, ಅದರ ಫಲವಾದ ಕುಡಿಗಳನ್ನು ಹುಡುಕುವ – ಆ ಮೂಲಕ ಪದಗಳ ಹದವನ್ನು ಅರಿಯುವ ಪ್ರಯತ್ನ – ಈ ಅಂಕಣ.

**ಅಕ್ಕಿ**: ಬತ್ತದ ಹೊಟ್ಟು ತೆಗೆದಾಗ ಒಳಗಿರುವ ಧಾನ್ಯವೇ ಅಕ್ಕಿ. ಇದು ದ್ರಾವಿಡ ಶಬ್ದ: ಇದು ತಮಿಳಿನಲ್ಲಿ ಅರಿ, ಅರಿಚು, ಅರಿಶಿ ಎಂದೂ, ಮಲಯಾಳಂನಲ್ಲಿ ಅರಿ ಎಂದೂ, ತುಳುವಿನಲ್ಲಿ ಅರಿ, ಅಕ್ಕಿ ಎಂದೂ ರೂಪ ತಾಳುತ್ತದೆ. ತೆಲುಗಿನಲ್ಲಿ ಅಕ್ಕಳ್ಲು ಎಂಬ ಶಬ್ದವಿದ್ದರೂ ಸಾಮಾನ್ಯವಾಗಿ ಬಿಯ್ಯಮು ಎನ್ನುತ್ತಾರೆ. ಅಕ್ಕಿಯ ಪ್ರಸ್ತಾಪ 'ವಡ್ಡಾರಾಧನೆ' ("ಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ") ಮತ್ತು ಪಂಪನ 'ಆದಿಪುರಾಣ' ("ನಮಗಕ್ಕಿಗೊಟ್ಟು ಮಡಗೂಟುಣ್ಬಂದಮಂ ಪೋಲದೇ") ದಂತಹ ಪ್ರಾಚೀನ ಕಾವ್ಯಗಳಲ್ಲಿದೆ.ಬತ್ತದಿಂದ ಹೊಟ್ಟು ತೆಗೆದು ಅಕ್ಕಿ ಪಡೆಯುವುದೇ 'ಅಕ್ಕಿಗುಟ್ಟು' ("ಸಾರಿಸುವೆಡೆಯೊಳ್ ಅಕ್ಕಿಗುಟ್ಟುವೆಡೆಯೊಳ್" – ಬ್ರಹ್ಮಶಿವನ 'ಸಮಯ ಪರೀಕ್ಷೆ').ಅಕ್ಕಿ ಶಬ್ದವನ್ನು ಮಂತ್ರಾಕ್ಷತೆ ಎಂಬರ್ಥದಲ್ಲಿ ನೇಮಿಚಂದ್ರನ 'ಲೀಲಾವತಿ' ಬಳಸುತ್ತದೆ ("ಜಿನನಂ ಪೂಜಿಸಿದಕ್ಕಿ ಮಾಮೆ ಸೊಡರ್ಗಳ್").ಅಕ್ಕಿಯನ್ನು ಮೂರು ಬಾರಿ ತೊಳೆದರೆ ಅನ್ನ ಹದವಾಗುವುದೆಂದು 'ಲೋಕೋಪಕಾರ' ಹೇಳುತ್ತದೆ ("ಕ್ರಮಮಱಿದು ಅಕ್ಕಿಯಂ ಇಂಬಾಗಿ ಮೂಱುಸೂಟಿ ಕರ್ಚಿ ಪೊಂರ್ವ್ವೊಡೆ ಕುದಿವೆಸಱಿೊಳು ಉತ್ತಮಮಕ್ಕುಂ ಪದದಿ"). ಅಕ್ಕಿಯನ್ನು ತೊಳೆದ ನೀರೇ 'ಅಕ್ಕಚ್ಚು' ಆಥವಾ ಈಗಿನ ಕಲಗಚ್ಚು (ಕರ್ಚು>ಕಚ್ಚು=ತೋಳೆಯುವುದು).

ಅಕ್ಕಿಯ ಕಾಳು ಇಡಿಯಾಗಿರದೆ ಒಡೆದಿದ್ದರೆ ಅದನ್ನು ಅಕ್ಕಿನುಚ್ಚು ಎಂದೂ, ಒರಟಾದ ಪುಡಿಯನ್ನು ಅಕ್ಕಿತರಿ ಎಂದೂ, ತುಂಬ ನವಿರಾದ ಪುಡಿಯನ್ನು ಅಕ್ಕಿಹಿಟ್ಟು ಎಂದೂ ಕರೆಯುವುದು ವಾಡಿಕೆ. ಇವೆಲ್ಲದರಿಂದಲೂ ವಿವಿಧ ತಿಂಡಿಗಳನ್ನು ಮಾಡುತ್ತಾರೆ: ಅಕ್ಕಿತರಿ ಉಪ್ಪಿಟ್ಟು, ಅಕ್ಕಿ ಸಜ್ಜಿಗೆ, ಅಕ್ಕಿರೊಟ್ಟಿ ಇತ್ಯಾದಿ. ಅಕ್ಕಿಯ ಹಿಟ್ಟಿನಂದ ಮಾಡುವ ಅಂಟು 'ಅಕ್ಕಿಸರಿ'.ಕನಕದಾಸರು ತಮ್ಮ 'ರಾಮಧಾನ್ಯಚರಿತೆ'ಯಲ್ಲಿ ಅಕ್ಕಿ–ರಾಗಿಗಳ ರೂಪಕದ ಮೂಲಕ ವರ್ಗಸಂಘರ್ಷವನ್ನು ಚಿತ್ರಿಸುತ್ತಾರೆ.

'ತಲೆಗೆ ಅಕ್ಕಿಕಾಳು ಹಾಕು' ಎಂದರೆ ಮದುವೆ ಮಾಡುವುದು ಎಂದರ್ಥ; 'ಬಾಯಿಗೆ ಅಕ್ಕಿಕಾಳು ಹಾಕಿಕೊಂಡಿರು' ಎಂದರೆ ಕಾಯುವುದು ಎಂದರ್ಥ. ಹೆಣದ ಬಾಯಿಗೆ ಅಕ್ಕಿಕಾಳು ಹಾಕುವ ಪರಿಪಾಟವಿದೆ.

ಸಣ್ಣ ಧಾನ್ಯಗಳ ಹೆಸರಿಗೆ ಅಕ್ಕಿ ಎಂಬ ಉತ್ತರಪದವನ್ನು ಸೇರಿಸುವ ಪರಿಪಾಟವೂ ಇದೆ: ನವಣಕ್ಕಿ, ಬಿದಿರಕ್ಕಿ ಇತ್ಯಾದಿ. ಅಕ್ಕಿಯಿಂದ ಮಾಡಿದ ಒಂದು ಬಗೆಯ ಮದ್ಯವನ್ನು 'ಅಕ್ಕಿಬೋಜ' ಎನ್ನುತ್ತಾರೆ; ಇದರ ಉಲ್ಲೇಖವನ್ನು ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಕಾಣಬಹುದು.

# ಶಾಶ್ವತ ನಿಧಿ

**ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ**

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಂಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಜುಲೈ 2015 ರಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಪ್ರೊ.ಎಸ್ ಎನ್ ಶ್ರೀಧರ್. ಸ್ಟೋನ್ ಬ್ರುಕ್ ವಿಶ್ವವಿದ್ಯಾಲಯ, ಯುಎಸ್ ಎ., ಡಾ. ಪಿ.ವಿ.ನಾರಾಯಣ, ಶ್ರೀ ಎಂ ಎಸ್ ರಾಮಪ್ರಸಾದ್ ಶ್ರೀ ಡೀ.ನಂ.ವೆಂಕಟರಮಣಯ್ಯ ಹಾಗೂ ಶ್ರೀ ಗುರುಪ್ರಸಾದ್

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 14.25 ಲಕ್ಷ

---

# ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ. ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್ ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು
2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದುbmsritrust@gmail.com
3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877
4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು

ದಯವಿಟ್ಟು ಗಮನಿಸಿ: ಹಾಲಿ ನಿಯಮಗಳ ಪ್ರಕಾರ ಸದಸ್ಯತ್ವ ಗುರುತಿನ ಕಾರ್ಡ್ ಇಲ್ಲದೇ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯ ಕಲಾಪಗಳಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ. ಆದ್ದರಿಂದ ಪ್ರತಿಷ್ಠಾನದ ಸದಸ್ಯತ್ವದ ಗುರುತಿನ ಕಾರ್ಡ್‌ನ್ನು ಪಡೆಯದಿರುವಂತಹ ಸದಸ್ಯರು ಶೀಘ್ರವಾಗಿ ಪಡೆದುಕೊಳ್ಳಬೇಕೆಂದು ಕೋರಲಾಗಿದೆ.

# ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ **ರೂಪಾಯಿ ಇಪ್ಪತ್ತೈದು ಸಾವಿರಗಳ ನಗದು ಹಾಗೂ ಸ್ಮರಣಿಕೆಯನ್ನು** ಒಳಗೊಂಡಿರುವ **ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ**ಗಾಗಿ 35 ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ 2014ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಒಂದು ಪ್ರತಿಯನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ), 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-560019 ದೂರವಾಣಿ ಸಂಖ್ಯೆ : 08026615877 ಇವರಿಗೆ ಕಳುಹಿಸಬಹುದು.

**ಕೊನೆಯ ದಿನಾಂಕ : 31ನೇ ಆಗಸ್ಟ್ 2015**

**Regd. with RNI, New Delhi. KARKAN 24541 dated 08.12.2014**

# ಪ್ರತಿಷ್ಠಾನದ ಹೊಸ ನಿಯತ ಕಾರ್ಯಕ್ರಮ

# ‘ಅಕ್ಕರ ಗೊಟ್ಟಿ’

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**

**ಸ್ಥಳ : ಶಾ. ಬಾಲೂರಾವ್ ಮಾತಿನ ಮನೆ ಎರಡನೆಯ ಮಹಡಿ, ಬಿಎಂಶ್ರೀ ಪ್ರತಿಷ್ಠಾನ**

**ಕಾರ್ಯಕ್ರಮದ ಸ್ವರೂಪ:**

1. ಇದು ಉಪನ್ಯಾಸ ಕಾರ್ಯಕ್ರಮವಲ್ಲ; ಪ್ರತಿಷ್ಠಾನವು ಯಾರನ್ನೂ ಅತಿಥಿಯಾಗಿ ಆಹ್ವಾನಿಸುವುದಿಲ್ಲ.
2. ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಒಬ್ಬರು ಆಸಕ್ತರು ತಾವಾಗಿ ಹತ್ತು–ಹದಿನೈದು ನಿಮಿಷಗಳಲ್ಲಿ ತಮ್ಮ ವಿಚಾರವನ್ನು ಮಂಡಿಸುತ್ತಾರೆ: ಅದರ ವಿಷಯವಾಗಿ ಒಂದು ಗಂಟೆಯವರೆಗೂ ಚರ್ಚೆ ಮುಂದುವರಿಯುತ್ತದೆ; ಚರ್ಚೆಯಲ್ಲಿ ಆಸಕ್ತರಾದ ಯಾರು ಬೇಕಾದರೂ ಭಾಗವಹಿಸಬಹುದು.
3. ಯಾರು ಬೇಕಾದರೂ ತಮಗೆ ಸೂಕ್ತವೆನಿಸಿದ ವಿಷಯವನ್ನು ಚರ್ಚೆಗೆ ಮಂಡಿಸಬಹುದು; ಆದರೆ ಕನಿಷ್ಠ ಒಂದು ತಿಂಗಳ ಮುಂಚೆ ವಿಷಯವನ್ನು ಪ್ರತಿಷ್ಠಾನದ ಕಾರ್ಯದರ್ಶಿಗಳಿಗೆ ತಿಳಿಸಬೇಕು. ಚರ್ಚೆಯಲ್ಲಿ ಪಾಲುಗೊಳ್ಳುವವರಿಗಾಗಿ ಪ್ರತಿಷ್ಠಾನದ ಸೂಚನಾ ಫಲಕದಲ್ಲಿ ಹಾಗೂ ಪ್ರತಿ ತಿಂಗಳ ಮೊದಲಲ್ಲಿ ಪ್ರಕಟವಾಗುವ ವಾರ್ತಾಪತ್ರ ‘ಹೊಂಗನಸು’ವಿನಲ್ಲಿ ತಿಳಿಯಪಡಿಸಲಾಗುವುದು
4. ಚರ್ಚೆಗೆ ಆರಿಸಿಕೊಳ್ಳುವ ವಿಷಯ ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ಆಗಿರಬಹುದು: ಸಾಹಿತ್ಯ, ಶಾಸನ, ಕಲೆ, ಸಿನಿಮ, ಸಂಗೀತ, ಇತಿಹಾಸ, ಮಾನವಿಕ – ಹೀಗೆ. ಗೊಟ್ಟಿಯಲ್ಲಿ ನಡೆಯುವ ಚರ್ಚೆಯುನ್ನು ಧ್ವನಿಮುದ್ರಿಸಿಕೊಂಡು ಯೂಟ್ಯೂಬ್‌ನಲ್ಲಿಯೂ ಹಾಕಲಾಗುವುದು.
5. ಪ್ರತಿ ತಿಂಗಳೂ ಎರಡನೆಯ ಶನಿವಾರ ಸಂಜೆ 6–00 ಗಂಟೆಗೆ ಕಾರ್ಯಕ್ರಮ ಆರಂಭ

## ಹಸ್ತಪ್ರತಿ ವಿಭಾಗ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಜುಲೈ ತಿಂಗಳಿನಲ್ಲಿ 2 ಗ್ರಂಥಗಳ ಶುಷ್ಕ ಶುದ್ಧೀಕರಣ, 7 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 8 ಗ್ರಂಥಗಳಲ್ಲಿ ಪತ್ರಗಳ ಜೋಡಣೆ, ಸ್ಕ್ಯಾನ್ ಮಾಡಲು ಸಿದ್ಧಪಡಿಸಿರುವುದು , 8 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 46 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 56 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ. ಕ್ರೈಸ್ಟ್ ಯೂನಿವರ್ಸಿಟಿಯಿಂದ ನಮಗೆ ಸಂರಕ್ಷಣೆಯ ಸಲುವಾಗಿ ಕಳಿಹಿಸಿದ ಒಂದು ‘ಕಾಲಜ್ಞಾನ’ವೆಂಬ ಗ್ರಂಥವನ್ನು ಸಂರಕ್ಷಿಸಿ, ಸೂಚಿ ತಯಾರಿಸಿ ಕೊಡಲಾಯಿತು.ಇಬ್ಬರು ಸಿಬ್ಬಂದಿಗಳು ಹಾಗೂ ಕೆಲ ಸ್ವಯಂಪ್ರೇರಿತರ ಶ್ರಮದಿಂದ ಈ ಚಟುವಟಿಕೆಗಳನ್ನು ಸಾಧಿಸಲಾಗಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 ‘C’ Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*.............................................................................

.............................................................................

.............................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭